# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 549 |
| 02. | ಮಾನ್ಯ ವಿಧಾನ ಪರಿಷತ್ತು ಸದಸ್ಯರ ಹೆಸರು | : ಶ್ರೀ ಪಿ. ಆರ್. ರಮೇಶ್ (ನಾಮ ನಿರ್ದೇಶನ ಹೊಂದಿದವರು) |
| 03. | ಉತ್ತರಿಸುವ ದಿನಾಂಕ | : 24/09/2020 |
| 04. | ಉತ್ತರಿಸುವ ಸಚಿವರು. | : ಮಾನ್ಯ ಗೃಹ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಅಂತರ್ಜಾಲದ ಮುಖಾಂತರ ಅಪರಾಧ ಪ್ರಕರಣಗಳು ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು: | ಸರ್ಕಾರದ ಗಮನಕ್ಕೆ ಬಂದಿರುತ್ತದೆ, ಕೈಗೊಂಡ ಕ್ರಮದ ವಿವರವನ್ನು ಅನುಬಂಧ–1 ರಲ್ಲಿ ವಿವರಿಸಿದೆ. |
| ಆ | ಕಳೆದ 5 ವರ್ಷಗಳಲ್ಲಿ ಅಂತರ್ಜಾಲದ ಮುಖಾಂತರ ದಾಖಲಾಗಿರುವ ಅಪರಾಧ ಪ್ರಕರಣಗಳೆಷ್ಟು: ಎಷ್ಟು ಪ್ರಕರಣಗಳಲ್ಲಿ ನ್ಯಾಯ ಒದಗಿಸಲಾಗಿದೆ: (ವಿವರ ನೀಡುವುದು) | ರಾಜ್ಯದಲ್ಲಿ 2015 ರಿಂದ 2020(ಸೆಪ್ಟೆಂಬರ್–15 ರವರೆಗೆ) ದಾಖಲಾದ ಸೈಬರ್ ಅಪರಾಧ ಪ್ರಕರಣಗಳ ವಿವರ.<br>ವರ್ಷ – ದಾಖಲಾದ ಪ್ರಕರಣ<br>2015 – 1447<br>2016 – 1224<br>2017 – 3178<br>2018 – 5803<br>2019 – 12037<br>2020 (ಸೆಪ್ಟೆಂಬರ್–15 ರವರೆಗೆ) – 7749<br>2015 ನೇ ಸಾಲಿನಲ್ಲಿ 02 ಪ್ರಕರಣ, 2016 ನೇ ಸಾಲಿನಲ್ಲಿ 03 ಪ್ರಕರಣ, 2017 ನೇ ಸಾಲಿನಲ್ಲಿ 05 ಪ್ರಕರಣ, 2018 ನೇ ಸಾಲಿನಲ್ಲಿ 03 ಪ್ರಕರಣ, 2019 ನೇ ಸಾಲಿನಲ್ಲಿ 01 ಪ್ರಕರಣಗಳಲ್ಲಿ ಶಿಕ್ಷೆಯನ್ನು ವಿಧಿಸಿ ನೊಂದವರಿಗೆ ನ್ಯಾಯವನ್ನು ಒದಗಿಸಲಾಗಿರುತ್ತದೆ. |
| ಇ | ಅಧುನಿಕ ಮಟ್ಟದ ತಾಂತ್ರಿಕತೆಯ ಮೂಲಕ ಈ ಅಪರಾಧಗಳ (ಸೈಬರ್ ಅಪರಾಧ) ಸ್ವರೂಪ ಬದಲಾಗುತ್ತಿರುವ ಪ್ರಕರಣಗಳನ್ನು ಪತ್ತೆಹಚ್ಚಲು ಮತ್ತು ತಡೆಗಟ್ಟಲು ಸರ್ಕಾರ ತೆಗೆದುಕೊಂಡ ಕ್ರಮವೇನು: (ವಿವರ ನೀಡುವುದು) | • ಸೈಬರ್ ಅಪರಾಧಗಳನ್ನು ಕಟ್ಟುನಿಟ್ಟಾಗಿ ನಿಯಂತ್ರಿಸಲು ಹಾಗೂ ಇಂತಹ ಪ್ರಕರಣಗಳನ್ನು ತಡೆಗಟ್ಟಲು ರಾಜ್ಯದ ಪ್ರತಿ ಜಿಲ್ಲೆ ಹಾಗೂ ನಗರಗಳಲ್ಲಿ ವಿಶೇಷ ಸೈಬರ್, ನಾರ್ಕೋಟಿಕ್ ಎಕನಾಮಿಕ ಪೊಲೀಸ್ ಠಾಣೆಗಳನ್ನು ಸ್ಥಾಪಿಸಲಾಗಿದೆ. ರಾಜ್ಯದಲ್ಲಿ ಒಟ್ಟು 46 ಸಿ.ಎ.ಎನ್ ಪೊಲೀಸ್ ಠಾಣೆಗಳು ಹಾಗೂ ಇವುಗಳ ಪೈಕಿ ಬೆಂಗಳೂರು ನಗರದಲ್ಲಿ ಮಾತ್ರ 8 ವಿಶೇಷ ಸಿ.ಎ.ಎನ್ ಪೊಲೀಸ್ ಠಾಣೆಗಳು ಪ್ರತಿ ವಿಭಾಗಕ್ಕೆ ಒಂದರಂತೆ ಕಾರ್ಯ ನಿರ್ವಹಿಸುತ್ತಿದೆ.<br>• ಸೈಬರ್ ಅಪರಾಧಗಳನ್ನು ತಡೆಗಟ್ಟುವ ಸಲುವಾಗಿ ಸಿ.ಐ.ಡಿ |

| | | |
|---|---|---|
| | | ಕಛೇರಿಯಲ್ಲಿ Centre for Cyber crime Investigation & Digital Forensic Training & Research ಘಟಕವನ್ನು ಪ್ರಾರಂಭಿಸಲಾಗಿದ್ದು, Data Security Council of India ರವರ ಸಹಯೋಗದೊಂದಿಗೆ ವಿಶೇಷ ಸೈಬರ್ ಪೊಲೀಸ್ ಠಾಣೆಯ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಗೆ ವಿಶೇಷ ತರಬೇತಿಯನ್ನು ನೀಡಲಾಗುತ್ತಿದೆ. ಸಿಐಡಿ ಕಛೇರಿಯಲ್ಲಿ ಸಿ.ಎಫ್.ಯು ವಿಭಾಗವನ್ನು ಹಿರಿಯ ಅಧಿಕಾರಿಗಳ ಉಸ್ತುವಾರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸಿ.ಎಫ್.ಯು ವಿಭಾಗದಲ್ಲಿ ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಪ್ರಕರಣಗಳನ್ನು ಭೇದಿಸಲಾಗುತ್ತಿದೆ.<br>• ಸೈಬರ್ ಕ್ರೈಂ ಪ್ರಕರಣಗಳನ್ನು ಪತ್ತೆಹಚ್ಚಲು ಬ್ಯಾಂಕಿನಿಂದ ಮಾಹಿತಿಯನ್ನು ಪಡೆಯಲಾಗುತ್ತದೆ.<br>• ಆರೋಪಿಗಳನ್ನು ಪತ್ತೆ ಹಚ್ಚಲು ಅವರ ಮೊಬೈಲ್ ನಂಬರಗಳ ಸಿ.ಡಿ.ಆರ್,ಎಸ್.ಡಿ.ಆರ್ ಮತ್ತು ಸಿ.ಎ.ಎಫ್ ಮಾಹಿತಿಗಳನ್ನು ಪಡೆಯಲಾಗುತ್ತದೆ. |
| ಈ | ದೂರವಾಣಿ ಕರೆ ಅಥವಾ ಸಂದೇಶಗಳ ಮುಂಖಾತರ ಹಲವು ಅಮಾಯಕ ಸಾರ್ವಜನಿಕರ ಹಣವನ್ನು ಅಂತರರಾಜ್ಯ ಮತ್ತು ವಿದೇಶಿ ಕಳ್ಳರು ಲಪಟಾಯಿಸಿರುವ ಬಗ್ಗೆ ದಾಖಲಾದ ಪ್ರಕರಣಗಳೆಷ್ಟು : (ವಿವರ ನೀಡುವುದು) | ದೂರವಾಣಿ ಕರೆ ಅಥವಾ ಸಂದೇಶಗಳ ಮುಂಖಾತರ ಹಲವು ಅಮಾಯಕ ಸಾರ್ವಜನಿಕರ ಹಣವನ್ನು ಅಂತರರಾಜ್ಯ ಮತ್ತು ವಿದೇಶಿ ಕಳ್ಳರು ಲಪಟಾಯಿಸಿರುವ ಬಗ್ಗೆ ರಾಜ್ಯದಲ್ಲಿ ಮತ್ತು ಸಿಐಡಿ ಘಟಕದಲ್ಲಿ ದಾಖಲಾದ ಪ್ರಕರಣಗಳ ವಿವರ<br><table><tr><th>ವರ್ಷ</th><th>ದಾಖಲಾದ ಪ್ರಕರಣ</th></tr><tr><td>2015</td><td>100</td></tr><tr><td>2016</td><td>113</td></tr><tr><td>2017</td><td>136</td></tr><tr><td>2018</td><td>288</td></tr><tr><td>2019</td><td>780</td></tr><tr><td>2020 (ಸೆಪ್ಟೆಂಬರ್–15 ರವರೆಗೆ)</td><td>825</td></tr></table> |
| ಉ | ಇಂತಹ ಪ್ರಕರಣಗಳನ್ನು ತಡೆಯಲು ಸರ್ಕಾರದ ಕ್ರಮಗಳೇನು? (ವಿವರ ನೀಡುವುದು) | ಸೈಬರ್ ಅಪರಾಧ ಪ್ರಕರಣಗಳನ್ನು ತಡೆಯಲು ಕೈಗೊಂಡ ಕ್ರಮದ ವಿವರವನ್ನು ಅನುಬಂಧ–1 ರಲ್ಲಿ ನೀಡಲಾಗಿದೆ. |

ಒಇ14ಪಿಸಿಕ್ಯೂ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

## ಅನುಬಂಧ-1

**ಸೈಬರ್ ಕ್ರೈಂ ಅಪರಾಧ ಪ್ರಕರಣಗಳನ್ನು ತಡೆಗಟ್ಟಲು ಹಾಗೂ ಸಾರ್ವಜನಿಕರಿಗೆ ಜಾಗೃತಿ ಮೂಡಿಲು ಈ ಕೆಳಕಂಡ ಕ್ರಮಗಳನ್ನು ಸಹ ಕೈಗೊಳ್ಳಲಾಗಿದೆ.**

- ಸೈಬರ್ ಕ್ರೈಂ ಅಪರಾಧದ ಬಗ್ಗೆ ಸಾರ್ವಜನಿಕರಲ್ಲಿ ತಿಳುವಳಿಕೆ ಮೂಡಿಸುವ ಸಲುವಾಗಿ ಮುದ್ರಣ ಮಾಧ್ಯಮಗಳ (ಪ್ರಿಂಟ್ ಮೀಡಿಯಾ) ಮೂಲಕ ವರದಿಗಳನ್ನು ಪ್ರಕಟಿಸುವುದರ ಮೂಲಕ ಜಾಗೃತಿ ಮೂಡಿಸಲಾಗುತ್ತಿದೆ.
- ಸಾಮಾಜಿಕ ಜಾಲತಾಣಗಳಾದ ಫೇಸ್‌ಬುಕ್, ವ್ಯಾಟ್ಸ್‌ಅಪ್ ಹಾಗೂ ಟ್ವಿಟರ್ಸ್‌ಗಳ ಮೂಲಕ ಸೈಬರ್ ಜಾಗೃತಿಯ ಸಂದೇಶಗಳನ್ನು ರವಾನಿಸುವ ಮೂಲಕ ಸಾರ್ವಜನಿಕರಲ್ಲಿ ಜಾಗೃತಿಯನ್ನು ಉಂಟು ಮಾಡಲಾಗುತ್ತಿದೆ.
- ಸೈಬರ್ ಪ್ರಕರಣಗಳನ್ನು ಸಮರ್ಥವಾಗಿ ತನಿಖೆಯನ್ನು ಕೈಗೊಳ್ಳಲು ರಾಜ್ಯದ ಪ್ರತಿ ಜಿಲ್ಲೆಯಲ್ಲಿಯೂ ಪ್ರತ್ಯೇಕವಾಗಿ ಒಂದು ಪೊಲೀಸ್ ಠಾಣೆ (CEN-Police Station-Cyber, Economic & Narcotic) ಯನ್ನು ಸ್ಥಾಪಿಸಲಾಗಿದೆ.
- ಬೆಂಗಳೂರು ನಗರದ ಎಲ್ಲಾ 8-ವಿಭಾಗಗಳಲ್ಲಿಯೂ ಮತ್ತು ಪೊಲೀಸ್ ಆಯುಕ್ತರ ಕಛೇರಿಯಲ್ಲಿ ಪ್ರತ್ಯೇಕವಾಗಿ ಸೈಬರ್ ಪೊಲೀಸ್ ಠಾಣೆಗಳನ್ನು ತೆರಯಲಾಗಿದೆ.
- ಸೈಬರ್ ಮತ್ತು ಆರ್ಥಿಕ ಅಪರಾಧಗಳನ್ನು ನಿಯಂತ್ರಿಸಲು ಹಾಗೂ ಈ ನಿಟ್ಟಿನಲ್ಲಿ ದಾಖಲಾದ ಪ್ರಕರಣಗಳ ತನಿಖೆಯನ್ನು ಸಮರ್ಪಕವಾಗಿ ಹಾಗೂ ತ್ವರಿತವಾಗಿ ನಿರ್ವಹಿಸಲು ಸಿಐಡಿ ವಿಭಾಗದಲ್ಲಿಯೂ ಸಹ ಸೈಬರ್ ಪೊಲೀಸ್ ಠಾಣೆಯನ್ನು ಸ್ಥಾಪಿಸಲಾಗಿದೆ.
- ಸೈಬರ್ ಪೊಲೀಸ್ ಠಾಣೆಗಳನ್ನು ಉನ್ನತ ದರ್ಜೆಗೆ ಏರಿಸಿ, ಪೊಲೀಸ್ ಠಾಣೆಯ ಅಧಿಕಾರಿ ಮತ್ತು ಪೊಲೀಸ್ ಸಿಬ್ಬಂದಿಗಳಿಗೆ ಸೈಬರ್ ಅಪರಾಧಗಳನ್ನು ತಡೆಗಟ್ಟುವ ಬಗ್ಗೆ ವಿಶೇಷ ತರಬೇತಿಯನ್ನು (ADVANCE TECHNOLOGY TRAINING ) ನೀಡಲಾಗಿದೆ.
- ರಾಜ್ಯದ ನಗರ ಮತ್ತು ಮಹಾನಗರಗಳಲ್ಲಿ ಸೈಬರ್ ಮತ್ತು ಆರ್ಥಿಕ ಅಪರಾಧಗಳಲ್ಲಿ ತೊಡಗಿಸಿಕೊಂಡಿರುವವರ ವಿರುದ್ಧ ಐಪಿಸಿ, ಮತ್ತು ಐಟಿ ಕಾಯ್ದೆ, ಕೆ.ಪಿ.ಐ.ಡಿ ಕಾಯ್ದೆ, ಎಫ್.ಇ ಕಾಯ್ದೆ ಮತ್ತು Buds-2019 ಕಾಯ್ದೆಯ ವಿವಿಧ ಕಲಂಗಳಡಿಯಲ್ಲಿ ಪ್ರಕರಣಗಳನ್ನು ದಾಖಲಿಸಿಕೊಂಡು, ತನಿಖೆಯನ್ನು ನಿಯಮಾನುಸಾರ ಕೈಗೊಂಡು, ಆರೋಪಿತರ ವಿರುದ್ಧ ಘನ ನ್ಯಾಯಾಲಯಗಳಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗುತ್ತಿದೆ.
- ಸೂಕ್ಷ್ಮ ಮತ್ತು ಪ್ರಮುಖ ಆರ್ಥಿಕ ಅಪರಾಧ ಪ್ರಕರಣಗಳನ್ನು ಸಿಐಡಿ ಘಟಕದ ಆರ್ಥಿಕ ಅಪರಾಧ ವಿಭಾಗಕ್ಕೆ ತನಿಖೆಗಾಗಿ ವರ್ಗಾಯಿಸಲಾಗುತ್ತದೆ.
- ರಾಜ್ಯದಲ್ಲಿ ಸೈಬರ್ ಕ್ರೈಂ ಅಪರಾಧ ಶೀರ್ಷಿಕೆ ಅಡಿಯಲ್ಲಿ ದಾಖಲಾದ ಪ್ರಕರಣಗಳಲ್ಲಿ ಮುಖ್ಯವಾಗಿ ಹಲವಾರು ಐ.ಪಿ ಗಳನ್ನು (Internet Protocol) ಸೈಬರ್ ಅಪರಾಧಕ್ಕೆ ದುರ್ಬಳಕೆ ಮಾಡುತ್ತಿರುವುದು ಹಾಗೂ ಬೇರೆ ಬೇರೆ ಸ್ಥಳಗಳಿಂದ ಅಕ್ರಮವಾಗಿ ಐ.ಪಿ ಗಳನ್ನು ಬಳಸಿಕೊಂಡು ವಂಚನೆ ಮಾಡುತ್ತಿರುವುದರಿಂದ ಪ್ರಕರಣಗಳ ಪತ್ತೆ/ತನಿಖೆಯನ್ನು ಕೈಗೊಳ್ಳಲಾಗಿರುತ್ತದೆ.

- ರಾಜ್ಯದಲ್ಲಿ ಎಲ್ಲಾ ಟೆಲಿಕಾಮ್ ಸೇವಾದಾರರನ್ನು (ಟಿಎಸ್‌ಪಿ) ಸಂಪರ್ಕಿಸಿ ಅವರ ಗ್ರಾಹಕರಿಗೆ ಬ್ಯಾಂಕಿಂಗ್ ಡಿಟೈಲ್ಸ್ ಮತ್ತು ಪಾಸ್‌ವರ್ಡ್‌ನ್ನು ಯಾರಿಗೂ ನೀಡಬಾರದೆಂದು ಸಮೂಹ ಸಂದೇಶಗಳನ್ನು (ಗ್ರೂಫ್ ಮೆಸೇಜ್‌ಸ್) ರವಾನಿಸುವ ಮೂಲಕ ಸಾರ್ವಜನಿಕ ಗ್ರಾಹಕರಿಗೆ ಜಾಗೃತಿ ಮೂಡಿಸಲಾಗಿರುತ್ತದೆ.
- ಸಿಐಡಿಯು ನ್ಯಾಸ್‌ಕಾಂ ಲ್ಯಾಬ್‌ನಲ್ಲಿ ಕಳೆದ ಕೆಲವು ವರ್ಷಗಳಿಂದ ಮಿಲಿಟರಿ, ಬ್ಯಾಂಕಿಂಗ್ ಸೆಕ್ಟರ್, ಸರ್ಕಾರಿ ಸಂಸ್ಥೆಗಳು, ನ್ಯಾಯಾಂಗದ ಅಭಿಯೋಜಕರಿಗೆ, ಪೊಲೀಸ್ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳಿಗೆ ಸೈಬರ್ ಕ್ರೈಂ ಅಪರಾಧಗಳನ್ನು ತಡೆಗಟ್ಟುವ ಬಗ್ಗೆ ಮತ್ತು ಪತ್ತೆ ಮಾಡುವ ಬಗ್ಗೆ ತರಬೇತಿಯನ್ನು ನೀಡಲಾಗಿರುತ್ತದೆ.